

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1477 |
| ಸದಸ್ಯರ ಹೆಸರು | : | ಶ್ರೀ ಅರುಣ ಶಹಾಪೂರ |
| ಉತ್ತರಿಸುವ ದಿನಾಂಕ | : | 17-03-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಸಚಿವರು |

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಡಿ ಕಾರ್ಯನಿರ್ವಹಿಸುತ್ತಿರುವ ವಸತಿ ಶಾಲೆಗಳ ಸಂಖ್ಯೆ ಎಷ್ಟು; ಮತ್ತು ಅವು ಯಾವುವು;</td><td>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿ 826 ವಸತಿ ಶಾಲೆ/ ಕಾಲೇಜುಗಳ ಕಾರ್ಯನಿರ್ವಹಿಸುತ್ತಿವೆ.<br>ವಸತಿ ಶಾಲೆಗಳ ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ.</td></tr>
<tr><td>ಆ)</td><td>ಅಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕ/ ಬೋಧಕೇತರರ ಸಂಖ್ಯೆ ಎಷ್ಟು; ಈ ಸಿಬ್ಬಂದಿಗಳಿಗೆ ನೀಡುತ್ತಿರುವ ಸೇವಾ ಸೌಲಭ್ಯಗಳು ಯಾವುವು;</td><td>ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿನ ವಸತಿ ಶಾಲೆ/ ಕಾಲೇಜುಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ/ ಬೋಧಕೇತರ ಸಿಬ್ಬಂಧಿಗಳ ವಿವರಗಳು ಈ ಕೆಳಕಂಡಂತಿವೆ.
<table>
<tr><th>ಕ್ರ ಸಂ</th><th>ವಿವರ</th><th>ಖಾಯಂ</th><th>ಅತಿಥಿ</th><th>ಹೊರಸಂಪನ್ಮೂಲ</th><th>ಒಟ್ಟು</th></tr>
<tr><td>1</td><td>ಬೋಧಕ</td><td>4749</td><td>2280</td><td>520</td><td>7549</td></tr>
<tr><td>2</td><td>ಬೋಧಕೇತರ</td><td>467</td><td>0</td><td>9150</td><td>9617</td></tr>
<tr><td colspan="2">ಒಟ್ಟು</td><td>5216</td><td>2280</td><td>9670</td><td>17166</td></tr>
</table>
ಸಂಘದ ವ್ಯಾಪ್ತಿಯ ಖಾಯಂ ನೌಕರರುಗಳಿಗೆ ಇತರೆ ಸರ್ಕಾರಿ ನೌಕರರುಗಳಿಗೆ ನೀಡುತ್ತಿರುವಂತೆ ವೇತನ, ತುಟ್ಟಿಭತ್ಯೆ, ವೈದ್ಯಕೀಯ ವೆಚ್ಚ ಮರುಪಾವತಿ, ಕಾಲಕಾಲಕ್ಕೆ ಸರ್ಕಾರದಿಂದ ನಿಗಧಿಪಡಿಸಿದ ವೇತನ ಬಡ್ತಿ ಹಾಗೂ ವೇತನ ಶ್ರೇಣಿ, ನೂತನ ಪಿಂಚಣಿ ಯೋಜನೆ, ಗಳಿಕೆ ರಜೆ ನಗದೀಕರಣ ಸೌಲಭ್ಯ, ಮೃತಪಟ್ಟ ಖಾಯಂ ನೌಕರರ ಕುಟುಂಬದ ಸದ್ಯಸ್ಯರಿಗೆ ಅನುಕಂಪ ಆಧಾರದ ಮೇಲೆ ನಿಯಮಾನುಸಾರ ನೌಕರಿ ಹಾಗೂ ಇತ್ಯಾದಿ ಸೌಲಭ್ಯಗಳನ್ನು ಕಲ್ಪಿಸಲಾಗುತ್ತಿರುತ್ತದೆ.</td></tr>
<tr><td>ಇ)</td><td>ಈ ಸಿಬ್ಬಂದಿ ವರ್ಗಕ್ಕೆ ಜ್ಯೋತಿ ಸಂಜೀವಿನಿ ಯೋಜನೆಯನ್ನು ವಿಸ್ತರಿಸುವ ಪ್ರಸ್ತಾವನೆ ಯಾವ ಹಂತದಲ್ಲಿದೆ; ವಿಳಂಭವಾಗುತ್ತಿರುವುದಕ್ಕೆ ಕಾರಣಗಳೇನು; ಹಾಗೂ ಇರುವ ಸಮಸ್ಯೆಗಳೇನು;</td><td>ಕ್ರೈಸ್ ಸಂಸ್ಥೆಯ ವಸತಿ ಶಾಲೆ/ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಖಾಯಂ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ಜ್ಯೋತಿ ಸಂಜೀವಿನಿ ಯೋಜನೆ ಹಾಗೂ ನಗದು ರಹಿತ ಆರೋಗ್ಯ ವೈದ್ಯಕೀಯ ಸೌಲಭ್ಯಗಳನ್ನು ನೀಡುವ ಸಂಬಂಧ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರಿಗೆ ಪತ್ರ ವ್ಯವಹರಿಸಲಾಗಿದ್ದು, ಸದರಿಯವರು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ರವರ ಅಭಿಪ್ರಾಯ ಕೋರಿರುತ್ತಾರೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ರವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮುಖಾಂತರ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರೊಂದಿಗೆ ಸಮಾಲೋಚಿಸಿ ಸದರಿ ಸೌಲಭ್ಯವನ್ನು ವಿಸ್ತರಿಸುವ ಸಂಬಂಧ</td></tr>
</table>

| | | |
|---|---|---|
| | | ಅಗತ್ಯ ಕ್ರಮವಹಿಸುವಂತೆ ಸೂಚಿಸಿರುತ್ತಾರೆ. ಅದರಂತೆ ಕ್ರಮವಹಿಸಲಾಗುತ್ತಿದೆ. |
| ಈ) | ಈ ಸಮಸ್ಯೆಗಳನ್ನು ಸರಿಪಡಿಸಿ ಸದರಿ ಯೋಜನೆಯನ್ನು ಆ ಸಿಬ್ಬಂದಿಗಳಿಗೆ ಒದಗಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? (ಪ್ರಸ್ತಾವನೆಯ ಸಂಪೂರ್ಣ ವಿವರ ನೀಡುವುದು) | ದಿನಾಂಕ: 28.10.2020 ರ ಪತ್ರದಲ್ಲಿ ಜ್ಯೋತಿ ಸಂಜೀವಿನಿ ಯೋಜನೆಯನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಅಧೀನದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಖಾಯಂ ಸಿಬ್ಬಂದಿಗಳಿಗೆ ಮತ್ತು ಅವರ ಅವಲಂಬಿತ ಕುಟುಂಬದ ಸದಸ್ಯರುಗಳಿಗೆ ಅನುಷ್ಠಾನಗೊಳಿಸಲು ವಾರ್ಷಿಕವಾಗಿ ತಗಲುವ ವೆಚ್ಚದ ವಿವರವನ್ನು ಸಲ್ಲಿಸಲು ಕಾರ್ಯಕಾರಿ ನಿರ್ದೇಶಕರು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರನ್ನು ಕೋರಲಾಗಿದೆ. ಮಾಹಿತಿ ಬಂದನಂತರ ಪ್ರಸ್ತಾವನೆ ಪಡೆದು ಅನುಮೋದನೆ ನೀಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕ್ರಮವಹಿಸಲಾಗುವುದು. |

ಸಂಖ್ಯೆ: ಸಕಇ 116 ಮೊದೇಶಾ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: 199(1477) ಕ್ಕೆ ಅನುಬಂಧ-1

| ಕ್ರ.ಸಂ. | ವಸತಿ ಶಾಲೆಗಳ ವಿವರಗಳು | ಪ.ಜಾತಿ | ಪ.ವರ್ಗ | ಹಿಂ.ವರ್ಗ | ಒಟ್ಟು |
|---|---|---|---|---|---|
| 1 | ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು | 206 | 45 | 142 | 393 |
| 2 | ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳು | 111 | 46 | - | 157 |
| 3 | ಅಟಲ್ ಬಿಹಾರಿ ವಾಜಪೇಯಿ ವಸತಿ ಶಾಲೆಗಳು | 10 | 1 | 4 | 15 |
| 4 | ಡಾ.ಬಿ.ಆರ್. ಅಂಬೇಡ್ಕರ್ ವಸತಿ ಶಾಲೆಗಳು (ಸಹಶಿಕ್ಷಣ) | 70 | 14 | - | 84 |
| 5 | ಡಾ.ಬಿ.ಆರ್. ಅಂಬೇಡ್ಕರ್ ಬಾಲಕಿಯರ ವಸತಿ ಶಾಲೆಗಳು | 31 | 11 | - | 42 |
| 6 | ಇಂದಿರಾಗಾಂಧಿ ವಸತಿ ಶಾಲೆಗಳು | 63 | 25 | 8 | 96 |
| 7 | ಏಕಲವ್ಯ ಮಾದರಿ ವಸತಿ ಶಾಲೆಗಳು | - | 12 | - | 12 |
| 8 | ಮೊರಾರ್ಜಿ ದೇಸಾಯಿ ಪದವಿ ಪೂರ್ವ ವಸತಿ ಕಾಲೇಜುಗಳು | 12 | 2 | 12 | 26 |
| 9 | ಮಾಸ್ತಿ ವೆಂಕಟೇಶ ಐಯ್ಯಂಗಾರ್ ವಸತಿ ಶಾಲೆ | - | - | 1 | 1 |
| | ಒಟ್ಟು | 503 | 156 | 167 | 826 |